# ಭಾಷಾ ಭೂದೃಶ್ಯದ ಮೂಲಕ/ಮುಖೇನ ಭಾಷಿಕ ವೈವಿಧ್ಯತೆಯನ್ನು ಕಲಿಸುವುದು.

**ರಿಜ್ವಾನ್ ಅಹಮದ್**

## ಪೀಠಿಕೆ

ಭಾರತದ ಸಾಂಸ್ಕೃತಿಕ, ರಾಜಕೀಯ, ಜನಾಂಗೀಯ ಹಾಗೂ ಧಾರ್ಮಿಕ ವೈವಿಧ್ಯತೆಗಳಿಗೆ ಶಾಲಾ ಪಠ್ಯಕ್ರಮದಲ್ಲಿ ಸಿಗುವ ಪ್ರಾಮುಖ್ಯತೆಗೆ ಹೋಲಿಸಿದಾಗ, ಭಾರತದ ಭಾಷಿಕ ವೈವಿಧ್ಯತೆಗೆ, ಈ ವೈವಿಧ್ಯತೆಯು ಪ್ರಕಟಗೊಳ್ಳುವ ವಿಭಿನ್ನ ಭಾಷೆಗಳು, ಅದರ ಉಪಭಾಷೆಗಳು (ನಾಡುನುಡಿಗಳು) ಹಾಗೂ ಲಿಪಿಗಳು, ಬಹುಭಾಷಿಕತೆ ಅಂದರೆ ಒಂದಕ್ಕಿಂತ ಹೆಚ್ಚಿನ ಭಾಷೆಯನ್ನು ಉಪಯೋಗಿಸುವ ಸಾಮರ್ಥ್ಯ ಮುಂತಾದ ಸಂಗತಿಗಳಿಗೆ ಅದೇ ರೀತಿಯ ಶೈಕ್ಷಣಿಕ ಗಮನವು ಸಿಗುವುದಿಲ್ಲ. ಭಾರತವು ಸಾವಿರಾರು ಭಾಷೆಗಳು ಹಾಗೂ ಉಪಭಾಷೆಗಳಿಗೆ ಮನೆಯಾಗಿದೆ ಹಾಗೂ ಇವೆಲ್ಲವೂ ಪ್ರಮುಖವಾದ ನಾಲ್ಕು ಭಾಷಾ ಪರಿವಾರಕ್ಕೆ ಸೇರುತ್ತವೆ- ಅವೆಂದರೆ ಇಂಡೋ- ಆರ್ಯನ್, ದ್ರಾವಿಡಿಯನ್, ಟಿಬೇಟೋ-ಬರ್ಮನ್ ಹಾಗೂ ಆಸ್ಟ್ರೋ- ಏಷಿಯಾಟಿಕ್ ಇವುಗಳಡಿಯಲ್ಲಿ ಬರುವಂತಹ ಹಲವಾರು ಭಾಷೆಗಳು. ಇವುಗಳು ಎಷ್ಟು ವಿಭಿನ್ನವೆಂದರೆ ಅವುಗಳನ್ನು ಪರಸ್ಪರ ಗ್ರಹಿಸಲು ಸಾಧ್ಯವಾಗುವುದಿಲ್ಲ. ಉದಾಹರಣೆಗೆ, ಹಿಂದಿ, ತಮಿಳು ಹಾಗೂ ಮಣಿಪುರಿ ಭಾಷೆಯನ್ನು ಮಾತನಾಡುವವರು ಪರಸ್ಪರ ಒಬ್ಬರನ್ನೊಬ್ಬರ ಮಾತನ್ನು ಅರ್ಥ ಮಾಡಿಕೊಳ್ಳಲಾರರು.

ಭಾರತದಲ್ಲಿ, ಅಧಿಕೃತ ಭಾಷೆ ಹಿಂದಿಯ ಜೊತೆಗೆ ಇಂಗ್ಲಿಷ್ ಕೂಡ ಸಹ-ಅಧಿಕೃತ ಭಾಷೆಯಾಗಿರುವುದಲ್ಲದೆ, 22 ಭಾಷೆಗಳು ಸಂವಿಧಾನಾತ್ಮಕವಾಗಿ ಅನುಸೂಚಿತ ಭಾಷೆಗಳೆಂಬ ಸ್ಥಾನವನ್ನು ಪಡೆದಿವೆ. ಆದರೆ, ಮುದ್ರಣದಲ್ಲಿ, ಧ್ವನಿ-ದೃಶ್ಯ ಮಾಧ್ಯಮ ಹಾಗು ಅಂತರ ಜಾಲದಲ್ಲಿ ಇದಕ್ಕಿಂತ ಹೆಚ್ಚಿನ ಭಾಷೆಗಳ ಉಪಯೋಗವನ್ನು ನಾವು ಕಾಣಬಹುದು. ಉದಾಹರಣೆಗೆ, ಪಶ್ಚಿಮ ಉತ್ತರ ಪ್ರದೇಶ ಹಾಗೂ ಬಿಹಾರದಲ್ಲಿ ಮಾತನಾಡುವ ಭೋಜ್ಪುರಿ ಭಾಷೆಯು ಅಧಿಕೃತ ಭಾಷೆಯೆಂಬ ಸ್ಥಾನವನ್ನು ಹೊಂದಿಲ್ಲವಾದರೂ, ಸಿನಿಮಾ ಸಂಭಾಷಣೆಗಳು, ಹಾಡುಗಳು ಹಾಗೂ ಅಂತರ್ ಜಾಲದಲ್ಲಿ ಬಹಳಷ್ಟು ಬಳಕೆಯಲ್ಲಿದೆ. ವಾಸ್ತವವಾಗಿ, ಭೋಜ್ಪುರಿ ಭಾಷೆಯಲ್ಲಿ ಸಾಹಿತ್ಯ ರಚನೆಗಳು ಸಹ ಇವೆ.2

ಇದಲ್ಲದೆ, 2001ರಲ್ಲಿ ನಡೆದ ಜನಗಣತಿಯ ಪ್ರಕಾರ, ಅನೇಕ ಭಾಷೆಗಳನ್ನು ಮಾತನಾಡುವ ಜನರು ತಮ್ಮ ಮಾತೃ ಭಾಷೆಯ ಜೊತೆಗೆ ಇನ್ನಿತರ 'ಉಪಾಂಗೀಯ' ಭಾಷೆಗಳನ್ನು ಮಾತನಾಡುತ್ತಾರೆಂದು ತಿಳಿದು ಬಂದಿದೆ (ಮಲ್ಲಿಕಾರ್ಜುನ್, 2010). ಹೀಗಾಗಿ ಬಹಳಷ್ಟು ಜನ ತಮ್ಮ ದಿನನಿತ್ಯದ ಸಾಮಾಜಿಕ-ಭಾಷಿಕ ಒಡನಾಟದಲ್ಲಿ ಅನೇಕ ಭಾಷೆಗಳನ್ನು ಬಳಸುತ್ತಾರೆಂದು ಇದರಿಂದ ನಮಗೆ ತಿಳಿದು ಬರುತ್ತದೆ. ಈ ಸಾಮಾಜಿಕ ಬಹುಭಾಷಿಕತೆಯನ್ನು ಶೈಕ್ಷಣಿಕ ವ್ಯವಸ್ಥೆಯಲ್ಲಿ ತ್ರಿ-ಭಾಷಾ ಸೂತ್ರವನ್ನಾಗಿ ಅಳವಡಿಸಲಾಗಿದೆ.3

ಭಾರತವು ಬಹುಭಾಷಿಕತೆಯ ಗುಣದಿಂದ ರೂಪಿತವಾಗಿದೆ ಎಂದು ಅಂಕಿಅಂಶಗಳಿಂದ ಸಾಬೀತು ಪಡಿಸಬೇಕಾಗಿಲ್ಲ; ಕಾರಣ ಅದು ನಮ್ಮ ಸಾಮಾಜಿಕ-ಭಾಷಿಕ ಅಸ್ತಿತ್ವದ ಭಾಗವೇ ಆಗಿದೆ. ತಮ್ಮ ತಮ್ಮ ಮಾತೃಭಾಷೆಯ ಜೊತೆಗೆ ಎರಡು ಇಲ್ಲವೆ ಮೂರು ಭಾಷೆಗಳನ್ನು ಹಾಗೂ/ಇಲ್ಲವೆ ಉಪಭಾಷೆಗಳನ್ನು ಮಾತನಾಡುವ ಜನರನ್ನು ನಾವು ಸಾಮಾನ್ಯವಾಗಿ ಕಾಣಬಹುದು. ಉದಾಹರಣೆಗೆ, ಶಿಕ್ಷಿತನಾದ ಭೋಜ್ಪುರಿ ಮಾತನಾಡುವ ವ್ಯಕ್ತಿಗೆ ಹಿಂದಿ ಹಾಗು ಬಹುಶಃ ಇಂಗ್ಲಿಷ್ ಬರುವ ಸಾಧ್ಯತೆ ಇರುತ್ತದೆ. ಅವರು ಪಟ್ನಾದಲ್ಲಿ ನೆಲೆಸುವವರಾಗಿದ್ದರೆ, ಅವರಿಗೆ ಸ್ವಲ್ಪ ಮಗಾಹಿ ಉಪಭಾಷೆ ಸಹ ತಿಳಿದಿರುವ ಸಾಧ್ಯತೆ ಹೆಚ್ಚಿರುತ್ತದೆ. ಬಿಹಾರದಲ್ಲಿ, ಬಸ್ಸು ಇಲ್ಲವೆ ರೈಲಿನಲ್ಲಿ ಓಡಾಡುವಾಗ ಜನರು ತಮ್ಮ ತಮ್ಮ ಉಪಭಾಷೆಗಳಲ್ಲಿ ರಾಜಕೀಯದ ಬಗ್ಗೆ ಚರ್ಚಿಸಿಕೊಳ್ಳುತ್ತಾ, ಮಧ್ಯದಲ್ಲಿ ಹಿಂದಿಯಲ್ಲಿ ಮಾತನಾಡುತ್ತಾ, ಇಂಗ್ಲೀಷ್ ಪದಗಳನ್ನು ಉಪಯೋಗಿಸುವುದನ್ನು ನಾನು ಗಮನಿಸಿದ್ದೇನೆ.4

ಭಾರತದಲ್ಲಿರುವ ಭಾಷಿಕ ವೈವಿಧ್ಯತೆಯು, ಅನೇಕ ಭಾಷೆಗಳನ್ನು ಹಾಗೂ ಉಪ ಭಾಷೆಗಳನ್ನು ಕೇವಲ ಮೌಖಿಕ ಸಂವಹನಕ್ಕಷ್ಟೇ ಬಳಸುವಲ್ಲಿ ಸೀಮಿತವಾಗಿಲ್ಲ; ಅವುಗಳು ವಿವಿಧ ಬರಹಗಳಲ್ಲಿ ಹಾಗೂ ಬರವಣಿಗೆಯ ವ್ಯವಸ್ಥೆಗಳಲ್ಲಿ ಬಳಕೆಯಾಗುವುದನ್ನು ನಾವು ಭಾರತದ ಆದ್ಯಂತ ಕಾಣಬಹುದು. ಪುಸ್ತಕಗಳು, ದಿನಪತ್ರಿಕೆಗಳು, ಕರಪತ್ರಗಳು, ಕೈಪಿಡಿ ಇತ್ಯಾದಿಗಳನ್ನು ಅಧಿಕೃತವಾಗಿ ಅನುಸೂಚಿಸಲಾಗದ ಇನ್ನಿತರ ಅನೇಕ ಭಾಷೆಗಳಲ್ಲಿ ಹಾಗೂ ಲಿಪಿಗಳಲ್ಲಿ ಬಹಷ್ಟು ಸಂಖ್ಯೆಯಲ್ಲಿ ಮುದ್ರಣ ಮಾಡಲಾಗುತ್ತದೆ. ಈ ಭಾಷಾ ವೈವಿಧ್ಯತೆಯ ಅತ್ಯಂತ ಪ್ರಬಲವಾಗಿ ಗೋಚರವಾಗುವ ಉದಾಹರಣೆಯೆಂದರೆ ಅನೇಕ ಭಾಷೆಗಳಲ್ಲಿ ಕಾಣುವ ಸಾರ್ವಜನಿಕ ಸಂಜ್ಞೆ ಹಾಗು ಚಿಹ್ನೆಗಳು. 21ನೇ ಶತಮಾನದ ಜಾಗತೀಕರಣಗೊಂಡ ಪ್ರಪಂಚದಲ್ಲಿ ಸಾರ್ವಜನಿಕ ಸಂಜ್ಞೆ ಹಾಗು ಚಿಹ್ನೆಗಳನ್ನು ಎಲ್ಲೆಡೆ ಕಾಣಬಹುದಾಗಿದೆ. ಇವು ಭಾಷೆ ಹಾಗೂ ಲಿಪಿಗಳೆರಡನ್ನೂ ಪ್ರತಿನಿಧಿಸುವ ಕಾರಣದಿಂದ ವಿಶಿಷ್ಟವಾದ ಗುಣವನ್ನು ಹೊಂದಿವೆ. ಈ

ಸಾರ್ವಜನಿಕ ಸಂಜ್ಞೆ ಹಾಗೂ ಚಿಹ್ನೆಗಳನ್ನು ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಇಲ್ಲವೆ ವ್ಯಕ್ತಿ ಇಲ್ಲವೆ ಖಾಸಗಿ ವ್ಯಾಪಾರಿ ಸಂಸ್ಥೆಗಳು ಅಳವಡಿಸಿರುವಂತಹುದು ಆಗಿರುತ್ತದೆ. ಇದಕ್ಕೆ ಉದಾಹರಣೆಯೆಂದರೆ ರಸ್ತೆಗಳ ಮೇಲೆ ಹಾಗೂ ಸರ್ಕಾರಿ ಕಟ್ಟಡಗಳ ಮೇಲೆ ಕಾಣಿಸುವ ಸಂಜ್ಞೆ ಹಾಗು ಚಿಹ್ನೆಗಳು, ಹಾಗೆಯೇ ಖಾಸಗಿ ಆಸ್ತಿಗಳಾದ ಮನೆಗಳು ಹಾಗೂ ವ್ಯಾಪಾರಿ ಸೊತ್ತುಗಳು, ಖಾಸಗಿ ಸಂಸ್ಥೆಗಳೆಂದರೆ ಅಂಗಡಿಗಳು ಹಾಗು ಹೋಟೆಲುಗಳ ಮೇಲೆ ಕಾಣುವಂತಹುದು. ಸಾಮಾಜಿಕ ಭಾಷಿಕತೆಯ ಸಾಹಿತ್ಯದಲ್ಲಿ, ಸಾರ್ವಜನಿಕ ಪ್ರದೇಶಗಳ ಗುರುತನ್ನು ಸೂಚಿಸುವ ಈ ಭಾಷಿಕ ವಸ್ತುಗಳನ್ನು ಭಾಷಾ ಭೂದೃಶ್ಯವೆಂದು (ಮುಂದೆ ಇದನ್ನು ಭಾ ಭೂ ಎಂದು ಸೂಚಿಸಲಾಗುತ್ತದೆ) ಕರೆಯಲಾಗುತ್ತದೆ.

ಭಾರತದ ಸಾಂಸ್ಕೃತಿಕ ವೈವಿಧ್ಯತೆಯು ಶಾಲಾ ಪಠ್ಯಕ್ರಮದಲ್ಲಿ ಪ್ರಾಮುಖ್ಯತೆಯನ್ನು ಪಡೆದಿದೆಯಾದರೂ, ಭಾಷಿಕಾ ವೈವಿಧ್ಯತೆಗೆ ಅದೇ ಆದ್ಯತೆ ದೊರೆತಿಲ್ಲ. ಹೀಗಾಗಿ, ವಿದ್ಯಾರ್ಥಿಗಳ ದಿನನಿತ್ಯದ ಬದುಕಿನಲ್ಲಿ ಭಾಷೆಗಳು ಹಾಗೂ ಉಪಭಾಷೆಗಳು ಸೃಷ್ಟಿಸುವ ಈ ಸಮೃದ್ಧ ಸಮ್ಮೇಳನವನ್ನು ಸಂಪನ್ಮೂಲವನ್ನಾಗಿ ಶಿಕ್ಷಕರು ತರಗತಿಗಳಲ್ಲಿ ದುಡಿಸಿಕೊಳ್ಳುವುದೇ ಇಲ್ಲ. ಇದರ ಫಲವಾಗಿ, ವಿದ್ಯಾರ್ಥಿಗಳು ತರಗತಿ ಹಾಗೂ ನಿಜ ಬದುಕಿನಲ್ಲಿರುವ ಭಾಷೆಗಳ ನಡುವೆ ಸಂಬಂಧವನ್ನು ಹೊಂದಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಈ ಲೇಖನದಲ್ಲಿ ನಾನು, ವಿದ್ಯಾರ್ಥಿಗಳು ಹಾಗೂ ಶಿಕ್ಷಕರು ಸಾರ್ವಜನಿಕ ಸಂಜ್ಞೆ ಹಾಗೂ ಚಿಹ್ನೆಗಳನ್ನು, ಜಾಹೀರಾತು/ ಸೂಚನಾ ಫಲಕಗಳಿಂದ ಸಂಗ್ರಹಿಸಿರುವ ಮಾಹಿತಿಯನ್ನು ಹೇಗೆ ಸಂಪನ್ಮೂಲವಾಗಿ ಬಳಸಬಹುದೆಂಬ ವಿಧಾನವನ್ನು ಸೂಚಿಸಿ, ಇದನ್ನು ಭಾಷಿಕ ವೈವಿಧ್ಯತೆ ಹಾಗೂ ಭಾಷೆಗೆ ಸಂಬಂಧಿಸಿದ ವಿಚಾರಗಳ ಕುರಿತಾದ ಕಲಿಕೆಗೆ ಹೇಗೆ ಉಪಯೋಗಿಸಿಕೊಳ್ಳಬಹುದೆಂದು ಚರ್ಚಿಸಿದ್ದೇನೆ. ಇದರೊಡನೆ, ಇಂತಹ ಮಾಹಿತಿಯ ಬಳಕೆ ಹಾಗೂ ಇದನ್ನು ಸಂಗ್ರಹಿಸುವ ಕಾರ್ಯದಲ್ಲಿ ವಿದ್ಯಾರ್ಥಿಗಳನ್ನು ಸಕ್ರಿಯವಾಗಿ ತೊಡಗಿಸುವುದರಿಂದ ಅವರ ಕಲಿಕೆ ವೃದ್ಧಿಸುತ್ತದೆ ಎಂಬುದೂ ನನ್ನ ವಾದವಾಗಿದೆ.

## ಭಾಷಾ ಭೂದೃಶ್ಯವನ್ನು ಭೋಧನಾ ಸಂಪನ್ಮೂಲವಾಗಿ ಬಳಸುವುದು

ಭಾಷಿಕ ವೈವಿಧ್ಯತೆಯ ಕುರುಹುಗಳಾದ ಬಹುಭಾಷಿಕತೆ, ವಿವಿಧ ಭಾಷೆಗಳನ್ನು ಬೆರೆಸುವದು, ಬದಲಾಯಿಸಿ ಬಳಸುವುದು ಹಾಗೂ ಶಬ್ದಗಳನ್ನು ಎರವಲು ಪಡೆಯುವುದು ಇತ್ಯಾದಿಗಳ ಕುರಿತಾಗಿ ಸಾಮಾಜಿಕ- ಭಾಷಾಶಾಸ್ತ್ರಜ್ಞರು ಬಹಳಷ್ಟು ಕಾಲದಿಂದ ಶೈಕ್ಷಣಿಕ ಶೋಧನೆಯನ್ನು ನಡೆಸುತ್ತಾ ಬಂದಿದ್ದಾರೆ. ಆದರೆ, ಇತ್ತೀಚಿನ ವರ್ಷಗಳಲ್ಲಿ ತಜ್ಞರು, ಭಾಷೆಯೊಂದರ ಒಟ್ಟಾರೆ ಸಾಮಾಜಿಕ

ಹಾಗೂ ಸಾಂಸ್ಕೃತಿಕ ಆಯಾಮಗಳನ್ನು ಅರಿಯಲು ಮತ್ತು ಅದನ್ನು ಬಳಸುವವರನ್ನು ಅರ್ಥ ಮಾಡಿಕೊಳ್ಳಲು, ಸಾರ್ವಜನಿಕ ಸಂಜ್ಞೆ ಹಾಗೂ ಚಿಹ್ನೆಗಳಲ್ಲಿ ಭಾಷೆ ಹಾಗೂ ಲಿಪಿಗಳ ಬಳಕೆಯ ಮುಖೇನ ಅಧ್ಯಯನ ಮಾಡಲು ಪ್ರಾರಂಭಿಸಿದ್ದಾರೆ. ಈ ರೀತಿಯಲ್ಲಿ ಭಾಷೆಗಳ ಭಾಷಿಕ ಜೀವಂತಿಕೆಯನ್ನು ಅಧ್ಯಯನ ಮಾಡುವತ್ತ, ಕೆನಡಾದಲ್ಲಿ ಲಾನ್ಡ್ರ್ಯ ಹಾಗೂ ಬೌಹ್ರಿಸ್ (1997) ಅವರು ಪ್ರಮುಖವಾದ ಮೊದಲ ಹೆಜ್ಜೆಯನ್ನು ಇಟ್ಟರು. ಇದು ಈಗ ಬೆಳೆದಭಾಷೆಯ ಅನೇಕ ಸಾಮಾಜಿಕ-ಸಾಂಸ್ಕೃತಿಕ ಆಯಾಮಗಳ, ಭಾಷೆಗೆ ಕುರಿತಾದ ನೀತಿ, ಸ್ಥಾನಮಾನ ಹಾಗೂ ಗೌರವ, ಅದು ಪ್ರತಿನಿಧಿಸುವ ಸಾಮಾಜಿಕ ಅಸ್ಮಿತೆ ಹಾಗೂ ಅಧಿಕಾರದ ಸಂಕೇತಗಳ ಅಧ್ಯಯನದ ಬಹು ದೊಡ್ಡ ಕ್ಷೇತ್ರವಾಗಿ ಹೊರಹೊಮ್ಮಿದೆ. (ಬೆನ್ ರಾಫೆಲ್, ಶೊಹಾಮಿ ಆಮ್ರಾ ಹಾಗೂ ಟ್ರಂಪರ್- ಹೆಕ್ಟ್ (2006). ಇನ್ನೊಂದು ರೀತಿಯಲ್ಲಿ ಇದನ್ನು ಹೇಳಬೇಕೆಂದರೆ, ಭಾಭೂ ಎಂಬುದು ಭಾಷೆಯ ಒಟ್ಟಾರೆ ಪರಿಸರವನ್ನು ಒಳಗೊಂಡಿದೆ; ಇದರಲ್ಲಿ ಭಾಷೆಯೆಂಬುದು ಸಾಮಾಜಿಕವಾಗಿ ಘಟಿಸುವಂತಹುದಾದದ್ದು; ಹೀಗಾಗಿ ಇದರಲ್ಲಿ ಸಾಮಾಜಿಕ ಅಂಶಗಳೂ ಅಂತರ್ಗತವಾಗಿದೆ ಎಂಬುದಾಗಿದೆ.

ಈ ದೃಷ್ಟಿಯಿಂದ ನೋಡಿದಾಗ, ನಗರವೊಂದರ ಭಾಷಾ ಭೂದೃಶ್ಯವೆಂಬುದು ಭಾಷಿಕ ವಸ್ತುಗಳಾದ ಭಾಷೆಗಳು ಹಾಗೂ ಲಿಪಿಗಳಿಂದ ಸೇರಿದ್ದು, ಅವುಗಳ ಮೂಲಕ ಸಾಂಸ್ಕೃತಿಕ ಪ್ರಾತಿನಿಧ್ಯವನ್ನು ಒಳಗೊಂಡಂತಹ ಪ್ರದೇಶವಾಗಿದೆ. ಎಲ್ಲಾ ಸಾಂಸ್ಕೃತಿಕ ಪ್ರಾತಿನಿಧ್ಯತೆಗಳನ್ನು ಸೈದ್ಧಾಂತಿಕ ಪ್ರಭಾವ ವ್ಯಾಪಿಸಿಕೊಂಡಿರುವ ಕಾರಣ, ಸಂಜ್ಞೆ ಹಾಗೂ ಚಿಹ್ನೆಗಳು ಸಹ ಸಾಂಸ್ಕೃತಿಕ ವಸ್ತುಗಳಾಗಿದ್ದು, ಸಾಮಾಜಿಕ ಅಸ್ಮಿತೆ ಹಾಗೂ ಸ್ಥಾನಮಾನಗಳ ಸೂಚಿಯಾಗಿವೆ (ಬ್ಲೊಮ್ಮಾಟ್, ಕಾಲಿನ್ಸ್ ಹಾಗೂ ಸ್ಲೆಂಬ್ರಾಕ್, 2005). ಈ ಕಾರಣದಿಂದಲೇ ವಿದ್ಯಾರ್ಥಿಗಳಿಗೆ ಸಂಜ್ಞೆ ಹಾಗೂ ಚಿಹ್ನೆಗಳು ಭಾಷೆಗಳ ನಡುವಿನ ಸಂಬಂಧಗಳನ್ನು ಹಾಗೂ ವಿವಿಧ ಗುಂಪುಗಳಲ್ಲಿ ಅವು ಪ್ರತಿನಿಧಿಸುವ ವಿಭಿನ್ನ ಹಾಗೂ ಪರಸ್ಪರ ಸ್ಪರ್ಧಾತ್ಮಕವಾಗಿರುವಂತಹ ಸಾಂಕೇತಿಕ ಮೌಲ್ಯಗಳನ್ನು ಅನ್ವೇಶಿಸಲು ಉತ್ತಮ ಮಾರ್ಗವಾಗಿವೆ. ಸಂಜ್ಞೆ ಹಾಗೂ ಚಿಹ್ನೆಗಳು ಆಸಕ್ತಿ ಕೆರಳಿಸುವಂತಹುದು, ಕಾರಣ ವಿದ್ಯಾರ್ಥಿಗಳಿಗೆ ಅವುಗಳ ಪರಿಚಯವಿದ್ದು ಅವರ ಸುತ್ತಮುತ್ತಲ್ಲಿ ಅದು ಸದಾ ಕಾಣುವಂತಹ ವಿಚಾರವಾಗಿವೆ. ಇತ್ತೀಚೆಗೆ ಔರಂಗಜೇಬ್ ರಸ್ತೆಯನ್ನು ಎ ಪಿ ಜೆ ಅಬ್ದುಲ್ ಕಲಾಂ ರಸ್ತೆ ಎಂದು ಮರುನಾಮಕರಣ ಮಾಡಬೇಕೆಂಬ ವಿವಾದವು, ಸಂಜ್ಞೆ ಹಾಗೂ ಚಿಹ್ನೆಗಳ ಹೊಂದಿರುವ ಸೈದ್ಧಾಂತಿಕ ಬಲದ ಉದಾಹರಣೆಯಾಗಿದೆ.

ನನ್ನ ಈ ಲೇಖನದಲ್ಲಿ ಮುಂದೆ, ಶಿಕ್ಷಕರು ಹಾಗೂ ವಿದ್ಯಾರ್ಥಿಗಳು ನಮ್ಮ ಸುತ್ತಮುತ್ತಲಿರುವ ಸಂಜ್ಞೆ ಹಾಗೂ ಚಿಹ್ನೆಗಳನ್ನು ಸಂಗ್ರಹಿಸಿ,ಅವುಗಳನ್ನು ಭಾಷೆ, ಬಹುಭಾಷಿಕತೆ, ಸಾಮಾಜಿಕ ಪ್ರಾತಿನಿಧ್ಯತೆ, ಭಾಷಾ ನೀತಿಗಳು ಹಾಗೂ ಭಾಷಾ ಹಕ್ಕುಗಳ ಕುರಿತಾಗಿ ಚರ್ಚಿಸಲು ಬಳಸಬಹುದೆಂಬುದಕ್ಕೆ ಉದಾಹರಣೆಗಳನ್ನು ನೀಡುತ್ತೇನೆ. ನಾನು ಚರ್ಚಿಸಿರುವ ವಿಧಾನ ಹಾಗೂ ವಿಷಯವು, ಬೋಧನೆ ಹಾಗೂ ಕಲಿಕೆಯ ಬಗ್ಗೆ ಇತ್ತೀಚೆ ನಡೆಸಿರುವ ಅಧ್ಯಯನಗಳನ್ನು ಆಧರಿಸಿದ್ದು, ಇದು ವಿದ್ಯಾರ್ಥಿಗಳನ್ನು ಕೇಂದ್ರೀಕರಿಸಿದ ಕಲಿಕಾ ವಿಧಾನವಾಗಿದ್ದು, ಶಿಕ್ಷಕರು ಇಲ್ಲಿ ಕಲಿಕಾ ಪ್ರಕ್ರಿಯೆಯ ಸಹಾಯಕರಾಗಿರುತ್ತಾರೆ; ಅಂದರೆ ಇಲ್ಲಿ ಅವರು ಜ್ಞಾನದ ಭಂಡಾರವೆಂದೂ, ವಿದ್ಯಾರ್ಥಿಗಳು ಅವರಿಂದ ತಂತಾನೆ ಜ್ಞಾನವನ್ನು ಪಡೆದುಕೊಳ್ಳುತ್ತಾರೆಂದೂ ಅಲ್ಲ. ಹೀಗೆಂದ ಮಾತ್ರಕ್ಕೆ ಶಿಕ್ಷರಿಗೆ ಜ್ಞಾನವಿರಬೇಕಿಲ್ಲ ಎಂದಲ್ಲ. ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ, ಶಿಕ್ಷರಲ್ಲಿರುವ ಜ್ಞಾನವು ತಾನಾಗಿಯೇ ವಿದ್ಯಾರ್ಥಿಗಳ ಕಲಿಕೆಯಾಗಿ ಮಾರ್ಪಾಡಾಗುವುದಿಲ್ಲ, ಹಾಗೆ ಅರ್ಥಪೂರ್ಣ ಹಾಗೂ ಸಕ್ರಿಯವಾದ ಕಲಿಕೆ ಸಂಭವಿಸಲು ಶಿಕ್ಷಕರು ವಿದ್ಯಾರ್ಥಿಗಳನ್ನು ಸಶಕ್ತಗೊಳಿಸಬೇಕಾಗುತ್ತದೆ.

ಅಂಕಿ-ಅಂಶ/ ಮಾಹಿತಿ ಸಂಗ್ರಹ

ಕಲಿಕೆಯಲ್ಲಿ ಪರಿಣಾಮಕಾರಿಯಾಗಿ ವಿದ್ಯಾರ್ಥಿಗಳನ್ನು ತೊಡಗಿಸಬೇಕಾದಲ್ಲಿ, ಕಲಿಕಾ ಸಾಮಗ್ರಿಗಳು ಹಾಗೂ ಚಟವಟಿಕೆಗಳನ್ನು ಆಸಕ್ತಿದಾಯಕ ಹಾಗೂ ನವ್ಯವಾಗಿರುವಂತೆ ರೂಪಿಸಬೇಕು. ತರಗತಿಯಲ್ಲಿ ಬಳಸುವ ಕಲಿಕಾ ಸಾಮಗ್ರಿಗಳನ್ನು ಅವರೇ ಸಂಗ್ರಹಿಸುವಂತಾದಾಗ, ಅವರ ಆಸಕ್ತಿಯನ್ನು ಅದು ಕೆರಳಿಸುತ್ತದೆ ಹಾಗೂ ಅವರನ್ನು ಸಶಕ್ತಗೊಳಿಸುತ್ತದೆ. ಆಗ ಶಿಕ್ಷಕರಿಗೆ ಅವರ ಮೇಲೆ ಭರವಸೆ ಇದೆಯೆಂಬ ಭಾವನೆ ಮೂಡುತ್ತದೆ, ಇಂತಹ ಸಂದರ್ಭದಲ್ಲಿ ಅವರಿಗೆ ನೀಡಿದ ಕೆಲಸವನ್ನು ಸಹ ಆಸಕ್ತಿಯಿಂದ ಮಾಡುತ್ತಾರೆ. ಈ ಯೋಜನೆಯನ್ನು ಕಾರ್ಯಗತಗೊಳಿಸಲು ವಿದ್ಯಾರ್ಥಿಗಳಿಗೆ ಬೆಲೆಬಾಳುವ ಕ್ಯಾಮರಾ ಇರಬೇಕೆಂದೇನಿಲ್ಲ . ಫೋಟೋಗಳನ್ನು ತೆಗೆಯಲು ವಿದ್ಯಾರ್ಥಿಗಳು ತಮ್ಮ ಮೊಬೈಲ್ ಫೋನುಗಳನ್ನು ಬಳಸಬಹುದು ಹಾಗೂ ಸಾಮಾನ್ಯ ಹಾಳೆಗಳ ಮೇಲೆ ಪ್ರಿಂಟ್ಔಟನ್ನು ತೆಗೆದುಕೊಳ್ಳಬಹುದು. ಈ ಫೋಟೊಗಳು ಸಂಜ್ಞೆ ಹಾಗೂ ಚಿಹ್ನೆಗಳ ಭಾಷೆಯನ್ನು ಓದಲು ಸಾಧ್ಯವಾಗುವಷ್ಟು ಸ್ಪಷ್ಟವಾಗಿದ್ದರೆ ಸಾಕು. ಕ್ಯಾಮೆರಾ ಇಲ್ಲವೆ ಫೋನುಗಳು ಲಭ್ಯವಿರದ ಪಕ್ಷದಲ್ಲಿ, ಸಾರ್ವಜನಿಕ ಫಲಕಗಳಲ್ಲಿ ಬಳಸಲಾಗಿರುವ ಭಾಷೆಯ ಕುರಿತಾಗಿ ಟಿಪ್ಪಣಿಗಳನ್ನು ಮಾಡಿಕೊಂಡು, ನಂತರ ತರಗತಿಯಲ್ಲಿ ಅದನ್ನು ಓದಿ ವಿವರಿಸಬಹುದು. ಹೀಗೆ

ವಿದ್ಯಾರ್ಥಿಗಳು ಜನಾಂಗಶಾಸ್ತ್ರಜ್ಞರಾಗಿ ಕೆಲಸ ಮಾಡುವುದನ್ನು ಕಲಿಯುತ್ತಾರೆ ಹಾಗೂ ಸಾಮಾಜಿಕ ಭಾಷಿಕ ವಸ್ತಗಳನ್ನು ಅರ್ಥಮಾಡಿಕೊಳ್ಳಲು ಕಲಿಯುತ್ತಾರೆ.

ತರಗತಿಯನ್ನು ಉಪಗುಂಪುಗಳನ್ನಾಗಿ ವಿಂಗಡಿಸಿ, ಅವರಿಗೆ ಪ್ರತಿ ಗುಂಪು ನಗರದ ಅಥವಾ ಟೌನೊಂದರ ವಿವಿಧ ಜಾಗಗಳಲ್ಲಿ ಕಾಣಬಹುದಾದ ಸಂಜ್ಞೆ ಹಾಗೂ ಚಿಹ್ನೆಗಳ ಚಿತ್ರಗಳನ್ನು ಸಂಗ್ರಹಿಸುವಂತೆ ಹೇಳಿ. ಮಾಹಿತಿ ಸಂಗ್ರಹಣೆಯು ಸಮಗ್ರವಾಗಿರುವಂತೆ ನೋಡಿಕೊಳ್ಳಲು, ಪ್ರತಿ ಗುಂಪಿಗೂ ವಿಭಿನ್ನ ಕೆಲಸಗಳನ್ನು ನೀಡಬಹುದು. ಉದಾಹರಣೆಗೆ, ಒಂದು ಗುಂಪಿಗೆ, ರಸ್ತೆಯ ಸಂಜ್ಞೆ ಹಾಗೂ ಚಿಹ್ನೆಗಳನ್ನು ಸಂಗ್ರಹಿಸಲು ಹೇಳಿದರೆ, ಮತ್ತೊಂದು ಗುಂಪಿಗೆ ಸರ್ಕಾರಿ ಕಟ್ಟಡಗಳ ಮೇಲಿರುವ ಸಂಜ್ಞೆ ಹಾಗೂ ಚಿಹ್ನೆಗಳನ್ನು ಸಂಗ್ರಹಿಸಲು ಹೇಳಬಹುದು. ಮುಂದಿನ ಗುಂಪು  ವಾಣಿಜ್ಯ ಚಿಹ್ನೆಗಳನ್ನು ಸಂಗ್ರಹಿಸಬಹುದು . ಇನ್ನೂ ಒಂದು ಗುಂಪು ಪ್ರತ್ಯೇಕ ವ್ಯಕ್ತಿಗಳು ತಮ್ಮ ಮನೆಗಳ ಮೇಲೆ ಇಟ್ಟಿರುವ ಖಾಸಗಿ ಚಿಹ್ನೆಗಳನ್ನು ಸಂಗ್ರಹಿಸಬಹುದು .  ಶಿಕ್ಷಕರೂ ಸಹ ಈ ಚಟುವಟಿಕೆಗೆ ಸೇರಿಕೊಂಡು ಅವರೂ ಸಹ ಸಂಜ್ಞೆ ಹಾಗೂ ಚಿಹ್ನೆಗಳ ಚಿತ್ರಗಳನ್ನು ತರಬಹುದು. ವಿದ್ಯಾರ್ಥಿಗಳು ತಾವು ತೆಗೆದ ಚಿತ್ರಗಳ ಸಂಗ್ರಹದ ಜೊತೆ ತಮ್ಮ ಹೆಸರುಗಳನ್ನು ಶಿಕ್ಷಕರಿಗೆ ಮೊದಲೇ ನೀಡಬೇಕೆಂದು ಹೇಳಬೇಕಾಗುತ್ತದೆ. ಆಗ ಶಿಕ್ಷಕರು ತರಗತಿಗೆ ಹೋಗುವ ಮುನ್ನ ನಡೆಸುವ ಬೋಧನಾ ಯೋಜನೆಗೆ ವಿದ್ಯಾರ್ಥಿಗಳು ಸಂಗ್ರಹಿಸಿರುವ ಈ ಮಾಹಿತಿಯನ್ನು ಬಳಸಿಕೊಳ್ಳಬಹುದು.

## ಮಾಹಿತಿ ವಿಶ್ಲೇಷಣೆ ಹಾಗೂ ಅನ್ವೇಶಣೆ

ಕೆಳಗೆ ದೆಹಲಿಯ ವಿವಿಧ ಭಾಗಗಳಿಂದ ತೆಗೆದುಕೊಂಡ ನಾಲ್ಕು ಸಂಜ್ಞೆ ಹಾಗೂ ಚಿಹ್ನೆಗಳಿವೆ. ಇವುಗಳನ್ನು ಭಾಷೆ ಹಾಗೂ ಲಿಪಿಗಳ ಸಾಮಾಜಿಕ ಹಾಗೂ ಸಾಂಸ್ಕೃತಿಕ ಆಯಾಮಗಳನ್ನು ವಿದ್ಯಾರ್ಥಿಗಳಿಗೆ ಕಲಿಸಿಕೊಡಲು ಹೇಗೆ ಬಳಸಬಹುದೆಂದು ನಾನಿಲ್ಲಿ ತೋರಿಸಿಕೊಡಲು ಯತ್ನಿಸುತ್ತೇನೆ. ಈ ಚಟುವಟಿಕೆಯು ಭಾಷೆ ಹಾಗೂ ಲಿಪಿಗಳ ಬಗ್ಗೆ ಅರಿವನ್ನು ಮೂಡಿಸುವುದಲ್ಲದೆ, ಸಮಗ್ರವಾಗಿ ಭಾಷೆಯೊಂದರ ಸಾಮಾಜಿಕ ಹಾಗೂ ಸಾಂಸ್ಕೃತಿಕ ಆಧಾರದ ಕುರಿತಾಗಿ ವಿಮರ್ಶಾತ್ಮಕವಾಗಿ ಚಿಂತಿಸಲು ಉಪಯೋಗಕಾರಿಯಾಗುತ್ತದೆ. ಭಾಷಿಕ ಭೂವಿಸ್ತಾರದ ಅಧ್ಯಯನವೆಂಬುದು ಇಂದು ಬಹು ವಿಸ್ತಾರವಾದ ಕ್ಷೇತ್ರವಾಗಿದ್ದು ಹಾಗು ಭಾ ಭೂ ಮಾಹಿತಿಯನ್ನಾಧರಿಸಿ ಅನೇಕ ವಿಚಾರಗಳನ್ನು ವಿವರಿಸಲು ಉಪಯೋಗಿಸಬಹುದಾದರೂ, ನನ್ನ ಅಧ್ಯಯನವನ್ನು ನಾಲ್ಕು ವಿಚಾರಗಳಿಗೆ ಸೀಮಿತಗೊಳಿಸಿಕೊಂಡಿದ್ದೇನೆ:

1. ಸಂಜ್ಞೆ ಹಾಗೂ ಚಿಹ್ನೆಗಳಿಗೆ ಯಾವ ಭಾಷೆಯನ್ನು ಬಳಸಬೇಕೆಂದು ಯಾರು ನಿರ್ಧರಿಸುತ್ತಾರೆ ಹಾಗೂ ಯಾವ ಪ್ರೇಕ್ಷಕರಿಗಾಗಿ ಅದನ್ನು ಉದ್ದೇಶಿಸಿ ಮಾಡಲಾಗಿದೆ? ಇದು ಭಾಷೆಯ ಆಯ್ಕೆಯ ಮೇಲೆ ಪರಿಣಾಮ ಬೀರುತ್ತದೆಯೆ?

2. ಸಂಜ್ಞೆ ಹಾಗೂ ಚಿಹ್ನೆಗಳ ಮೇಲೆ ಯಾವ ಭಾಷೆಯನ್ನು ಬಳಸಲಾಗುತ್ತದೆ ಹಾಗೂ ಇದು ಸರ್ಕಾರದ ಇಲ್ಲವೆ ಒಂದು ಸಂಸ್ಥೆಯ ಭಾಷಾ ನೀತಿಯ ಬಗ್ಗೆ ಏನು ತಿಳಿಸುತ್ತದೆ?5

3. ಸಂಜ್ಞೆ ಹಾಗೂ ಚಿಹ್ನೆಗಳಲ್ಲಿ ಉಪಯೋಗಿಸಲಾಗುವ ಭಾಷೆಯನ್ನು ಮಾತನಾಡುವವರ ಸಾಮಾಜಿಕ ಹಾಗೂ ರಾಜಕೀಯ ಮೌಲ್ಯಗಳ ಬಗ್ಗೆ ಚಿಹ್ನೆಗಳು ಏನು ಸೂಚಿಸುತ್ತವೆ? ಹಾಗೂ ಯಾರ ಭಾಷೆಯನ್ನು ಉಪಯೋಗಿಸಲಾಗುವುದಿಲ್ಲವೋ ಅವರ ಬಗ್ಗೆ ನಮಗೇನು ಈ ಮೂಲಕ ತಿಳಿಸುತ್ತದೆ?

4. ಬಹುಭಾಷಿಕ ಸಂಜ್ಞೆ ಹಾಗೂ ಚಿಹ್ನೆಗಳಲ್ಲಿ, ಮೇಲಿಂದ ಕೆಳಕ್ಕೆ ಹಾಗೂ ಬಲದಿಂದ ಎಡಕ್ಕೆ ಭಾಷೆಗಳು ಯಾವ ಕ್ರಮದಲ್ಲಿ ಬಂದಿದೆ ಎಂಬುದು ಭಾಷೆಗೆ ಇರುವ ಅಧಿಕಾರದ ಶ್ರೇಣೀಕರಣವನ್ನು ಸೂಚಿಸುತ್ತದಯೇ?

ಈ ಪ್ರಶ್ನೆಗಳು ಯಾವುದೇ ರೀತಿಯಲ್ಲಿ ಸಂಪೂರ್ಣವೆಂದಲ್ಲ, ಬದಲಾಗಿ ವಿದ್ಯಾರ್ಥಿಗಳು ಭಾಷೆಯ ಸುತ್ತಮುತ್ತಲಿರುವ ಸಾಮಾಜಿಕ ವಿಚಾರಗಳ ಬಗ್ಗೆ ಇವು ಚಿಂತಿಸುವಂತೆ ಪ್ರೇರೇಪಿಸಬಹುದಾದ ಉದಾಹರಣೆಗಳಷ್ಟೇ. ಬೋಧಕರು, ಅವರ ಬಳಿ ಇರುವ ಭಾಷಾ ಸಾಮಗ್ರಿಗಳು ಹಾಗೂ ತರಗತಿಯಲ್ಲಿರುವ ವಿದ್ಯಾರ್ಥಿಗಳನ್ನು ಆಧರಿಸಿ ತಮ್ಮದೇಯಾದ ಪ್ರಶ್ನೆಗಳನ್ನು ಸೃಷ್ಟಿಸಿಕೊಳ್ಳುವುದು ಒಳ್ಳೆಯದು. ತರಗತಿ ಕೇರಳದ ಒಂದು ಸಣ್ಣ ಹಳ್ಳಿಯಲ್ಲಿ ಇಲ್ಲವೆ ಟೌನಿನಲ್ಲಿ ನಡೆಯುತ್ತಿದೆಯೊ ಅಥವಾ ರಾಜಧಾನಿ ನಗರ ದೆಹಲಿಯಲ್ಲಿ ನಡೆಯುತ್ತಿದೆಯೊ ಎಂಬುದು ಆಧಾರದ ಮೇಲೆ ಪ್ರಶ್ನೆಗಳು ರೂಪಿತವಾಗುತ್ತದೆ.

ಚಿತ್ರ 1 ಹಾಗೂ 2 ದೆಹಲಿಯ ಭಾಷಿಕಾ ಭೂವಿಸ್ತಾರದಲ್ಲಿ ಕಾಣಬಹುದಾದ, ಸರ್ಕಾರಿ ಸಂಜ್ಞೆ ಹಾಗೂ ಚಿಹ್ನೆಯ ಉದಾಹರಣೆಗಳಾಗಿದೆ. ಇಲ್ಲಿ ಭಾಷೆಗಳ ಬಳಕೆಯಲ್ಲಿ ವ್ಯತ್ಯಾಸಗಳನ್ನು ಗಮನಿಸಬಹುದು. ಭಾರತದ ಅಧಿಕೃತ ಭಾಷೆಯಾದ ಹಿಂದಿ ಹಾಗೂ ಇಂಗ್ಲೀಷ್ ಜೊತೆಗೆ ಚಿತ್ರ 1ರಲ್ಲಿ, ಇನ್ನೆರೆಡು ಭಾಷೆಗಳನ್ನು ಉಪಯೋಗಿಸಲಾಗಿದೆ- ಉರ್ದು ಹಾಗೂ ಪಂಜಾಬಿ. ಇವು ದೆಹಲಿಯ ಬಹುಪಾಲು ರಸ್ತೆಗಳಿಗೆ ನಾಲ್ಕು ಭಾಷೆಗಳನ್ನು ಬಳಸಿ ಬರೆಯುವ ಸಂಜ್ಞೆ ಹಾಗೂ ಚಿಹ್ನೆಗಳನ್ನು ಪ್ರತಿನಿಧಿಸುತ್ತದೆ. ಚಿತ್ರ2 ರಲ್ಲಿ ಎರಡೇ ಭಾಷೆಗಳನ್ನು ಬಳಸಲಾಗಿದೆ- ಹಿಂದಿ ಹಾಗೂ ಇಂಗ್ಲೀಷ್.

ಇವೆರಡೂ ಸಂಜ್ಞೆ ಹಾಗೂ ಚಿಹ್ನೆಗಳು ಬಳಸಿಕೊಂಡು ಭಾಷೆಯ ಸಾಮಾಜಿಕ ಹಾಗೂ ಸಾಂಸ್ಕೃತಿಕ ಆಯಾಮಗಳು ಹಾಗೂ ದೆಹಲಿಯಲ್ಲಿ ಅದರ ಬಳಕೆಯ ಬಗ್ಗೆ ವಿದ್ಯಾರ್ಥಿಗಳಲ್ಲಿ ಚರ್ಚೆಯನ್ನು ಉಂಟುಮಾಡಬಹುದು. ಇಂತಹ ಚರ್ಚೆ ಈ ಕೆಳಗಿನ ವಿಚಾರಗಳನ್ನು ಒಳಗೊಳ್ಳಬಹುದು:

1. ಸಂಜ್ಞೆ ಹಾಗೂ ಚಿಹ್ನೆಯಲ್ಲಿ ಹಿಂದಿ ಹಾಗೂ ಇಂಗ್ಲೀಷ್ ಅನ್ನು ಬಳಸಿರುವುದು ಅರ್ಥಮಾಡಿಕೊಳ್ಳಬಹುದಾದರೂ, ಮೊದಲ ಚಿತ್ರದಲ್ಲಿ ಉರ್ದು ಹಾಗೂ ಪಂಜಾಬಿಯನ್ನು ಸೇರಿಸಿರುವುದು ಯಾಕೆ? ಇವೆರಡು ಹೆಚ್ಚುವರಿ ಭಾಷೆಗಳು ಎರಡನೆ ಚಿತ್ರದಲ್ಲೇಕೆ ಇಲ್ಲ?
2. ಈ ಭಾಷೆಗಳನ್ನು ಮಾತನಾಡುವವರು ಯಾರು? ಅವರು ಭಾಷಿಕ ಅಲ್ಪಸಂಖ್ಯಾತರೇ ? ಬೇರೆ ಭಾಷೆಗಳಾದ ಉದಾಹರಣೆಗೆ ಬೆಂಗಾಲಿ ಭಾಷೆ ಕೂಡ ಈ ಫಲಕದ ಮೇಲೆ ಇರಬೇಕಾಗಿತ್ತೇ ?

ಮೇಲೆ ನೀಡಿರುವ ಪ್ರಶ್ನೆಗಳನ್ನು ಉತ್ತರಿಸಲು, ತರಗತಿಯು ಇನ್ನೂ ಕೆಲವು ಪ್ರಶ್ನೆಗಳ ಬಗ್ಗೆ ಚಿಂತಿಸಬೇಕಾಗಬಹುದು, ಅವುಗಳೆಂದರೆ:

1. ಉರ್ದು ಹಾಗೂ ಪಂಜಾಬಿ ಭಾಷೆಗಳ ಬಳಕೆಗೆ ಅನುವು ಮಾಡುವ ಯಾವುದಾದರು ಕಾನೂನು ಇಲ್ಲವೆ ನೀತಿಗಳು ಈಗಾಗಲೆ ಇವೆಯೆ? ಈ ನೀತಿಗಳು ಸಂವಿಧಾನಾತ್ಮಕ ಷರತ್ತುಗಳ ಫಲವಾಗಿ ರೂಪಿತವಾದದ್ದೆ? ಈ ಭಾಷೆಗಳನ್ನು ಮಾತನಾಡುವವರಿಗೆ ಇದರ ಬಳಕೆಯ ತೀರ್ಮಾನದಲ್ಲಿ ಯಾವುದಾದರು ಪಾತ್ರವಿದೆಯೆ?

2. ಈ ಸಂಜ್ಞೆ ಹಾಗೂ ಚಿಹ್ನೆಗಳನ್ನು ಸರ್ಕಾರದ ವಿವಿಧ ಇಲಾಖೆಗಳು ನಿಯಂತ್ರಿಸುತ್ತದೆಯೆ? ಉದಾಹರಣೆಗೆ, ಮೊದಲ ಚಿತ್ರವು ದೆಹಲಿ ಸರ್ಕಾರದ ಪರಿಧಿಯೊಳಗೆ ಬರುತ್ತದೆಯೆ ಹಾಗೂ ಎರಡನೆಯದು ಕೇಂದ್ರ ಸರ್ಕಾರದ ಅಡಿಯಲ್ಲಿ ಬರುತ್ತದೆಯೆ?

ಈ ಪ್ರಶ್ನೆಗಳು ಬಹುಭಾಷಿಕತೆ, ಭಾಷಾ ನೀತಿಗಳು, ಅಲ್ಪಸಂಖ್ಯಾತ ಭಾಷೆಗಳು, ಭಾಷೆಗಳ ಕುರಿತಾಗಿರುವ ಸಂವಿಧಾನಾತ್ಮಕ ಷರತ್ತುಗಳು ಇತ್ಯಾದಿಗಳ ಬಗ್ಗೆ ವಿದ್ಯಾರ್ಥಿಗಳು ಆಸಕ್ತಿದಾಯಕ ಚರ್ಚೆಯಲ್ಲಿ ತೊಡಗುವಂತೆ ಮಾಡುತ್ತದೆ. ಶಿಕ್ಷಕರ ಬಳಿ ಎಲ್ಲ ಪ್ರಶ್ನೆಗಳಿಗೂ ಉತ್ತರವಿಲ್ಲದೆ ಹೋಗಬಹುದು , ಅದು ಪರವಾಯಿಲ್ಲ . ಇದರ ಉದ್ದೇಶವೇನೆಂದರೆ ಒಂದು ತರಗತಿ ಇಡಿಯಾಗಿ ಅನ್ವೇಷಣೆ ಹಾಗೂ ಆವಿಷ್ಕಾರದ ಒಂದು ಪ್ರಯಾಣದಲ್ಲಿ ಹೆಜ್ಜೆ ಇಡುವುದೇ

ಆಗಿದೆ . ಕೆಲವು ಉತ್ತರಗಳು ಬೇರೆಯವಕ್ಕಿಂತ ಸುಲಭವಾಗಿ ಮುನ್ನೆಲೆಗೆ ಬರುತ್ತವೆ . ಆದರೆ ಅಭ್ಯಾಸದ ಮೂಲಕ ಕಲಿಯುವ ವಿಮರ್ಶಾತ್ಮಕ ಚಿಂತನೆ ಮಾತ್ರ ವಿದ್ಯಾರ್ಥಿಗಳಿಗೆ ಅವರ ಬದುಕಿಡೀ ಒಂದು ಅನುಕೂಲವಾಗಿ ಪರಿಣಮಿಸುತ್ತದೆ .

ಈಗ ನಾನು ಎರಡು ಸರ್ಕಾರೇತರ, ವ್ಯಾವಹಾರಿಕವಾಗಿ ಉಪಯೋಗಿಸುವ ಸಂಜ್ಞೆ ಹಾಗೂ ಚಿಹ್ನೆಗಳ (ಚಿತ್ರ 3 ಹಾಗೂ 4) ಉದಾಹರಣೆಯ ಬಗ್ಗೆ ಚರ್ಚಿಸುತ್ತೇನೆ:

ಚಿತ್ರ 3ರನ್ನು ದೆಹಲಿಯ ಜಾಕಿರ್ ನಗರದ ಒಂದು ಕ್ಲಿನಿಕಿನಿಂದ ತೆಗೆದುಕೊಳ್ಳಲಾಗಿದೆ. ಅದರಲ್ಲಿ ಮೂರು ಭಾಷೆಗಳಿವೆ, ಆದರೆ ಚಿತ್ರ 4 ವಸಂತ್ ವಿಹಾರದ ಮಾಲ್ ನಿಂದ ತೆಗೆದುಕೊಂಡಿದ್ದು ಅದರಲ್ಲಿ ಇಂಗ್ಲೀಷನ್ನು ಮಾತ್ರ ಬಳಸಲಾಗಿದೆ. ಇವೆರಡೂ ಸಂಜ್ಞೆ ಹಾಗೂ ಚಿಹ್ನೆಗಳ ನಡುವಿನ ವ್ಯತ್ಯಾಸವನ್ನು ಅರ್ಥಮಾಡಿಕೊಳ್ಳಲು, ಕೆಳಗಿನ ಪ್ರಶ್ನೆಗಳನ್ನು ಬಳಸಬಹುದು:

1. ಚಿತ್ರ 3 ಹಾಗೂ ಚಿತ್ರ 4ರಲ್ಲಿ ಎಷ್ಟು ಭಾಷೆಗಳನ್ನು ನೀವು ನೋಡುತ್ತೀರಿ? ಆ ಭಾಷೆಗಳನ್ನು ನೀವು ಗುರುತಿಸಬಲ್ಲಿರಾ?

2. ವೈದಶಾಲೆಯ ಹಾಗೂ ಟಾಮ್ಮಿ ಹಿಲ್ಫಿಗರ್ ನ ಉದ್ದೇಶಿತ ಗ್ರಾಹಕರು ಯಾರು? ಅವರು ಒಂದು ನಿರ್ದಿಷ್ಟ ಸಾಮಾಜಿಕ ಆರ್ಥಿಕ ವರ್ಗಕ್ಕೆ ಸೇರಿದವರೇ? ಈ ವ್ಯತ್ಯಾಸಗಳು ಸಂಜ್ಞೆ ಹಾಗೂ ಚಿಹ್ನೆಗಳ ಭಾಷೆಗೆ ಸಂಬಂಧಿಸಿದೆಯೇ?

3. ವ್ಯಾವಹಾರಿಕ ಸಂಜ್ಞೆ ಹಾಗೂ ಚಿಹ್ನೆಗಳಲ್ಲಿ ಭಾಷೆಗಳ ಬಳಕೆಯನ್ನು ನಿರ್ದೇಶಿಸುವ ಸರ್ಕಾರಿ ನೀತಿಗಳೇನಾದರೂ ಇವೆಯೆ?6

ಬೋಧಕರು ಚರ್ಚೆಯ ನೇತೃತ್ವವನ್ನು ವಹಿಸಿ, ಭಾಷೆಗಳು ವಾಚ್ಯಾರ್ಥವನ್ನು ಮೀರಿ ವಿವಿಧ ಅರ್ಥಗಳನ್ನು ವ್ಯಕ್ತಪಡಿಸುತ್ತದೆ ಎಂಬುದನ್ನು ತರಗತಿಯು ಮನಗಾಣುವಂತೆ ಮಾಡಬಹುದು. ಉದಾಹರಣೆಗೆ ಇಂಗ್ಲೀಷ್, ಹಿಂದಿ ಬಳಕೆ ಮದ್ಯಮ ಮೇಲ್ವರ್ಗದ ನಿರ್ದಷ್ಟ ಅಸ್ಮಿತೆಯನ್ನು ವ್ಯಕ್ತಪಡಿಸುತ್ತದೆ (ಗುಪ್ತಾ ಹಾಗೂ ಕಪೂರ್, 191; ಪ್ರಾಕ್ಟರ್ 2014). ಇದೇ ಕಾರಣಕ್ಕಾಗಿಯೇ ಟಾಮ್ಮಿ ಹಿಲ್ಫಿಗರ್ ಅಂಗಡಿಯಲ್ಲಿ ಹಿಂದಿಯ ಬಳಕೆಯನ್ನು ಕಡೆಗಣಿಸಲಾಗಿದೆ. ಕ್ಲಿನಿಕ್ ನ ಫಲಕಕ್ಕೆ ಹಿಂದಿ ಹಾಗೂ ಉರ್ದು ಬಳಸಿರುವ ಕಾರಣ, ಜಾಕಿರ್ ನಗರದ ಅವರ ಗ್ರಾಹಕರು ಹಿಂದಿ ಹಾಗು ಉರ್ದು ಮಾತನಾಡುವವರಾಗಿದ್ದು, ಅವರು ಇಂಗ್ಲೀಷ್

ಬಳಸುವುದಿಲ್ಲ. ಕ್ಲಿನಿಕ್ ನ ಭಾಷಾ ಬಳಕೆಯು ಮುಖ್ಯವಾಗಿ ಸಂವಹನ ಉದ್ದೇಶವನ್ನು ಆಧರಿಸಿದೆ.

ಕೊನೆಗೆ ಇಲ್ಲಿ ಚರ್ಚಿಸಿರುವ ಫಲಕಗಳನ್ನು ನವ ದೆಹಲಿಯ ಜಾಕಿರ್ ನಗರದ ಖಾಸಗಿ ಮನೆಗಳಿಂದ ತೆಗೆದುಕೊಳ್ಳಲಾಗಿದೆ. ಚಿತ್ರ 5ರಲ್ಲಿ ಉರ್ದು ಹಾಗೂ ಇಂಗ್ಲೀಷ್ ನ ಬಳಕೆಯಾಗಿದ್ದರೆ, ಚಿತ್ರ 6 ರಲ್ಲಿ ಇಂಗ್ಲೀಷ್ ಮಾತ್ರ ಬಳಕೆಯಾಗಿದೆ. ಇವೆರಡೂ ಒಂದೇ ಜಾಗದಿಂದ/ ಏರಿಯಾದಿಂದ ತೆಗೆದುಕೊಳ್ಳಲಾಗಿದೆ ಎಂಬುದು ಗಮನಿಸಬೇಕಾದ ವಿಚಾರ. ಇಲ್ಲಿ ಸಹ, ವಿದ್ಯಾರ್ಥಿಗಳು, ಇವೆರಡೂ ಫಲಕಗಳನ್ನು ಗಮನಿಸಿ ಬರಬಹುದಾದ ತೀರ್ಮಾನಗಳ ಬಗ್ಗೆ ಚರ್ಚೆಯನ್ನು ನಡೆಸಲು ಪ್ರೋತ್ಸಾಹಿಸಬಹುದು. ಪ್ರತಿಯೊಬ್ಬರು ತಮ್ಮ ಮನೆಯ ಫಲಕಕ್ಕೆ ಯಾವ ಭಾಷೆಯನ್ನಾದರೂ ಬಳಸಬಹುದೆಂಬ ಸ್ವಾತಂತ್ರವನ್ನು ಹೊಂದಿದ್ದಾರೆಂಬ ಸಂಗತಿಯು ಚರ್ಚೆಯಿಂದ ಹೊರಹೊಮ್ಮುತ್ತದೆ. ಆದರೆ ಈ ಆಯ್ಕೆಯು ಸಿದ್ಧಾಂತಗಳಿಂದ ಸ್ವತಂತ್ರವಾದುದಲ್ಲ. ಮೊದಲ ಚಿತ್ರದಲ್ಲಿ ಉರ್ದು ಹಾಗೂ ಅರೇಬಿಕ್ ನ ಬಳಕೆ ಹಾಗೂ ಎರಡನೆಯದಲ್ಲಿ ಇಂಗ್ಲೀಷ್ ಮಾತ್ರ ಬಳಸಿರುವುದು ಆ ಮಾಲೀಕರು ಆಧುನಿಕ ಭಾರತದಲ್ಲಿ ಉರ್ದು ಹಾಗೂ ಇಂಗ್ಲೀಷ್ ಭಾಷೆಗಳು ಪ್ರತಿನಿಧಿಸುವ ವಿವಿಧ ಸಾಮಾಜಿಕ ಮೌಲ್ಯಗಳಿಗೆ ಸಂಬಂಧಿಸಿದ ಸಿದ್ಧಾಂತಗಳನ್ನು ಸೂಚಿಸುತ್ತದೆ.

## ಕೊನೆಯ ಮಾತು

ಈ ಲೇಖನದಲ್ಲಿ, ಸರ್ವೇಸಾಮಾನ್ಯವಾಗಿ ರಸ್ತೆಗಳಲ್ಲಿ, ಮಾರುಕಟ್ಟೆ ಹಾಗೂ ಮಾಲ್ ಗಳಲ್ಲಿ ಕಾಣಬಹುದಾದ ಸಂಜ್ಞೆ ಹಾಗೂ ಚಿಹ್ನೆಗಳನ್ನು ಬಳಸಿ ಭಾಷಿಕ ವೈವಿಧ್ಯತೆ ಹಾಗು ಭಾಷೆಗೆ ಸಂ ಬಂಧಿಸಿದ ಇನ್ನಿತರ ಸಾಮಾಜಿಕ- ಸಾಂಸ್ಕೃತಿಕ ಆಯಾಮಗಳಾದ ಭಾಷೆಯ ಬಳಕೆಯನ್ನು ನಿರ್ದೇಶಿಸುವ ನೀತಿಗಳು, ಬಹುಭಾಷಿಕತ್ವ, ಭಾಷೆ ಹಾಗೂ ಪ್ರಾಧಿನಿಕತ್ವ ಮತ್ತು ಅಲ್ಪಸಂಖ್ಯಾತ ಭಾಷೆಗಳ ಬಗ್ಗೆ ಬೋಧಿಸಲು ಉಪಯೋಗಿಸಬಹುದಾದ ವಿಚಾರವನ್ನು ನೀಡಲಾಗಿದೆ. ಈ ರೀತಿಯ ಸಾಮಗ್ರಿಗಳನ್ನು ವಿದ್ಯಾರ್ಥಿಗಳು ಹಾಗೂ ಶಿಕ್ಷರು ಸಂಗ್ರಹಿಸುವ ಮೂಲಕ ನಮ್ಮ ಭಾಷೆ ಹಾಗೂ ಭಾಷಿಕ ವೈವಿಧ್ಯತೆಯ ಬಗ್ಗೆ ತಿಳುವಳಿಕೆಯನ್ನು ವೃದ್ಧಿಸಿಕೊಳ್ಳು ಬಳಸಬಹುದಲ್ಲದೆ, ವಿದ್ಯಾರ್ಥಿ ಕೇಂದ್ರಿತವಾದ ಕಲಿಕಾ ಪರಿಸರವನ್ನು ಇದು ಸೃಷ್ಟಿಸಲು ನೆರವಾಗುತ್ತದೆ, ಹಾಗೆಯೇ ವಿದ್ಯಾರ್ಥಿಗಳಲ್ಲಿ ವಿಮರ್ಶಾತ್ಮಕ ಆಲೋಚನಾ ಸಾಮರ್ಥ್ಯವನ್ನು ಬೆಳೆಸುತ್ತದೆ.

## ಟಿಪ್ಪಣಿಗಳು

1. ಈ ಬರವಣಿಯ ಕುರಿತಾಗಿ ತಮ್ಮ ಅನಿಸಿಕೆ ಅಭಿಪ್ರಾಯಗಳನ್ನು ನೀಡಿದ ಸಂಪಾದಕರು ಹಾಗೂ ಅನಾಮಧೇಯ ವಿಮರ್ಶಕರಿಗೆ ನಾನು ಆಭಾರಿಯಾಗಿದ್ದೇನೆ. ಇದರೊಡನೆ, ಈ ಲೇಖನದಲ್ಲಿ ಉಪಯೋಗಿಸಿಕೊಳ್ಳು ಚಿತ್ರಗಳನ್ನು ನೀಡಿದ ಡಾ. ಕೌಸಾರ್ ಮಾಜ್ಹರಿ ಹಾಗೂ ಡಾ.ಮಹಮೂದ್ ಅಕ್ತರ್ ಅವರಿಗೆ ನನ್ನ ಕೃತಜ್ಞತೆಗಳು.

2. ಉದಾಹರಣೆಗಾಗಿ www.bhojpuria.com ಈ ವೆಬ್‌ಸೈಟನ್ನು ನೋಡಿ. ಇದರಲ್ಲಿ ಭೋಜ್ಪುರಿ ಸಾಹಿತ್ಯದ ಬಗ್ಗೆ ಒಂದು ಇಡಿ ವಿಭಾಗವಿದೆ ಹಾಗೂ ಇಂಗ್ಲೀಷ್‌ನಿಂದ ಭೋಜ್ಪುರಿಗೆ ಒಂದು ಆನ್ ಲೈನ್ ಶಬ್ದಕೋಶ ಸಹ ಇದೆ.

3. ಭಾರತೀಯ ಭಾಷೆಗಳ ಬೋಧನೆಯ ಕುರಿತಾದ ಸೂತ್ರಗಳು ಹಾಗೂ ನೀತಿಗಳ ವಿಮರ್ಶೆಗೆಗಾಗಿ ಭಾಷೆಯ ಬಗ್ಗೆ ನ್ಯಾಷನಲ್ ಕರಿಕ್ಯುಲಂ ಫ್ರೇಂ ವರ್ಕ್ ಅವರ ಅಭಿಪ್ರಾಯ ಮಂಡನಾ ಲೇಖನವನ್ನು (2006) ನೋಡಿ.

4. ಅಲ್ಪಸಂಖ್ಯಾತರ ಮಾತೃ ಭಾಷೆಗಳ ಕಣ್ಮರೆಯ ಬಗ್ಗೆ ತಿಳಿಯಲು ಅಹಮದ್ (2011) ಹಾಗೂ ಶರ್ಮಾ (2001) ನೋಡಿ.

5. ಭಾಷಾ ನೀತಿಗಳೆಂಬುದು ಈಗಾಗಲೆ ನೇರವಾಗಿ ಬರೆದ ದಾಖಲೆಗಳಲ್ಲದೆ, ಭಾಷೆಯನ್ನು ಸಾರ್ವಜನಿಕ ಉದ್ದೇಶಗಳಿಗೆ ಬಳಸುವುದರ ಬಗ್ಗೆ ದಾಖಲಾಗದ ಪದ್ಧತಿಗಳನ್ನೂ ಒಳಗೊಂಡಿದೆ.

6. ಕೆನಾಡದ ಕ್ಯುಬೇಕ್ ಅಲ್ಲಿರುವ ನೀತಿಗಳು ಫ್ರೇಂಚ್ ನ್ನೇ ಸಂಜ್ಞೆ ಹಾಗೂ ಚಿಹ್ನೆಗಳಲ್ಲಿ ಬಳಸಬೇಕೆಂದು ನಿರ್ದೇಶಿಸುತ್ತದೆ. ಇತ್ತೀಚೆಗೆ, ಕಂಪನಿಯೊಂದು ತಮ್ಮ ಪಲಕದಲ್ಲಿ ಫ್ರೇಂಚನ್ನು ಉಪಯೋಗಿಸದ್ದರೂ, ಇಂಗ್ಲೀಷ್ ಹಾಗೂ ಫ್ರೇಂಚ್ ಅಕ್ಷರಗಳನ್ನು ಒಂದೇ ಗಾತ್ರದ ಪ್ರಮಾಣದಲ್ಲಿ ಬರೆದಿದ್ದರೆಂಬ ಕಾರಣಕ್ಕೆ , ಕಂಪನಿಯ ಮೇಲೆ ದಂಡವನ್ನು ಹೇರಲಾಯಿತು.

**ರಿಜ್ವಾನ್ ಅಹಮದ್** (ಮಿಶಿಗೆನ್ ಅಲ್ಲಿ ಪಿ ಹೆಚ್ ಡಿ) ಪ್ರಸ್ತುತವಾಗಿ ಕತಾರ್ ವಿಶ್ವವಿಧ್ಯಾಲಯದಲ್ಲಿ ಸಾಮಾಜಿಕ ಭಾಷಿಕಶಾ ಸ್ತ್ರದ ಸಹಾ ಸಹಾಯಕ ಪ್ರೊಫೆಸರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಅವರಿಗೆ ಸಂಶೋಧನೆಯ ಆಸಕ್ತಿ ವಿಷಯಗಳೆಂದರೆ- ಭಾಷೆ ಹಾಗೂ ಅಸ್ಮಿತೆ, ಶಿಕ್ಷಣದಲ್ಲಿ ಭಾಷೆ ಹಾಗೂ ಆರ್ಥೋಗ್ರಫಿ (ಭಾಷೆಯೊಂದರ ಅಕ್ಷರ- ಪದಗಳ ಲಿಪಿಯ ಪದ್ಧಿತಿ). ಪ್ರಾಗ್ಮಾಟಿಕ್ಸ್, ಲ್ಯಾಂಗ್ವೇಜ್ ಇನ್ ಸೊಸೈಟಿ ಹಾಗೂ ಮಾರ್ಡನ್ ಏಷಿಯನ್ ಸ್ಟಡೀಸ್ ಬಗ್ಗೆ ಸಂಶೋಧನಾ ಲೇಖನಗಳನ್ನು ಬರೆದಿದ್ದಾರೆ.

*Rizwan.ahmad@qu.edu.qa*

**ಪರಾಮರ್ಶನೆ**

Ahmad, R. (2011). Urdu in Devanagari: Shifting orthographic practices and Muslim identity in Delhi. *Language in Society*, 40(3), 259-284.

Ben-Rafael, E., Shohamy, E., Amara, H. & TrumperHecht, N. (2006). The symbolic construction of the public space: The case of Israel. *International Journal of Multilingualism,* 3(1),7-28.

Blommaert, J., Collins, J., & Slembrouck, S. (2005). Polycentricity and interactional regimes in 'global neighborhoods'. *Ethnography*, 6(2), 205-235. Available from https://www.academia.edu/1410280/Spaces_of_multilingualism

Gupta, R. S. & Kapoor, K. (1991). Introduction. In R. S. Gupta & Kapil Kapoor, (Eds.), English in *India: Issues and problems,* (pp. 13-24). Delhi:Academic Foundation.

Landry, R. & Bourhis, R. (1997). Linguistic landscapes and ethnolinguistic vitality: An empirical study. *Journal of Language and Social Psychology*, 16(2), 23-49.

Mallikarjun, B. (2010). Patterns of Indian multilingualism. *Language in India*. E-Journal,10. Retrieved from http://www.languageinindia.com/june2010/mallikarjunmultilingualismfinal.pdf

NCERT. (2006*). National focus group position paper on teaching of Indian language.* New Delhi: NCERT.

Proctor, L. M. (2014). English and globalization in India: The fractal nature of discourse. *Journal of Linguistic Anthropology*, 24(3), 294-314.

Schiffman, H. (2006). Language policy and linguistic culture. In T. Ricento (Ed.), An introduction to language policy: *Theory and method* (pp. 111-125). Oxford: Blackwell.

Scott, M. (2015). *French language still vulnerable in Quebec, judge rules in rejecting challenge to sign law*. Retrieved from http://news.nationalpost.com/news/canada/french-language-still-vulnerable-in-quebec-judge-rules-in-rejecting-challenge-to-sign-law

Sharma, J. C. (2001). Multilingualism in India. *Language in India*. E-journal, 1(8). Retrieved from http://www.languageinindia.com/dec2001/jcsharma2.html

**ಚಿಂತನಾತ್ಮಕ ಪ್ರಶ್ನೆಗಳು:**

೧. ಭಾಷಾ ಶಿಕ್ಷಣದಲ್ಲಿ ಯಾವ ಅಂಶಕ್ಕೆ ಶೈಕ್ಷಣಿಕ ಗಮನ ಸಿಗುತಿಲ್ಲವೆಂದು ಈ ಲೇಖನದಲ್ಲಿ ಹೇಳಲಾಗಿದೆ?

೨. ಭಾಷಿಕ ಭೂವಿಸ್ತಾರವೆಂದರೇನು?

೩. ಶಿಕ್ಷಕರು ಹಾಗೂ ವಿದ್ಯಾರ್ಥಿಗಳು ನಮ್ಮ ಸುತ್ತಮುತ್ತಲಿರುವ ಸಂಜ್ಞೆ ಹಾಗೂ ಚಿಹ್ನೆಗಳ ಭಾಷಾ ಬಳಕೆಯ ಕುರಿತು ಸಂಗ್ರಹಿಸಿದನ್ನು ಮಾಹಿತಿಯನ್ನು ಯಾವ ರೀತಿ ತರಗತಿಯ ಕಲಿಕೆಗೆ ಉಪಗೋಗಿಸಬಹುದು?

೪. ಭಾಷೆಗೆ ಸಂಬಂಧಿಸಿದ ಯಾವ ಸಾಮಾಜಿಕ- ಸಾಂಸ್ಕೃತಿಕ ಆಯಾಮಗಳನ್ನು ಈ ಲೇಖನದಲ್ಲಿ ಚರ್ಚಿಸಲಾಗಿದೆ?

**ಅನುವಾದಕರು**- ಉಷಾ ಬಿ ಎನ್. **ಪರಿಶೀಲನೆ**- ಗಣೇಶ್ ಯು

**ಮೂಲ -** *Language and Language Teaching* Volume 5 Number 1 Issue 9 January 2012